ಕಮಲಾ ಗೋದಮ್ಮನವರನ್ನು ಪರಿಹಾಸ್ಯಮಾಡುತ್ತಾ

"ನೀನೇ ಪರವಾಗಿಲ್ಲ ಗೋದಜ್ಜಿ. ಅಂತರ – ರಾಷ್ಟ್ರೀಯ ವ್ಯಕ್ತಿಯಾದೆ (International Personality)"

"ವಯಸ್ಸಿನಲ್ಲಿ ನಾನು ಹಿರಿಯಳು ನಿಜ – ಆದರೆ ನನಗೂ ಗುರುವಾಗಿದ್ದವಳು ನಿಮ್ಮಮ್ಮ ಕಣೇ ಕಮಲಾ – ಈ ಮರ್ಯಾದೆ ಅವಳಿಗೆ ಸೇರಬೇಕು. ಆ ಮಹಾತಾಯಿ ಹಚ್ಚಿ ನಮ್ಮ ಕೈಯಲ್ಲಿಟ್ಟಿದ್ದ ಜ್ಞಾನದೀಪ ನಂದದಂತೆ ನಾವು ನೋಡಿಕೊಂಡರೆ ಸಾಕು. ನನ್ನ ಮಾತು ಕೇಳಿ ಈ ಪುಣ್ಯಾತ್ಮ ಒಂದು ಪುಸ್ತಕ ಬರೆಯುತ್ತಾರಂತೆ – ಅವಳ ಮಾತು ಕೇಳಿದರೆ ನೂರು ಪುಸ್ತಕ ಬರೆಯುತ್ತಿದ್ದರು"

ಎಂದರು.

ಬೆಳಿಗ್ಗೆ ಪ್ರೊಫೆಸರನ್ನೂ ನಾರಾಯಣಸ್ವಾಮಿಯನ್ನೂ ಏರೋಪ್ಲೇನಿನಲ್ಲಿ ಬಿಟ್ಟುಬರಲು ಕಮಲಾ, ಇಂದುಮತಿ ಅನುವಾದರು. ಗೋಪಾಲ, ಸೌಭಾಗ್ಯ ಬಿಡದೆ ಗಂಟೇಬಿದ್ದರು.

ಪ್ರೊಫೆಸರನ್ನು ಅಗಲುವ ವೇಳೆ ಸಮೀಪಿಸಿದಂತೆ ಎಲ್ಲರ ಖಿನ್ನತೆ ಹೆಚ್ಚಿತು.

ಪ್ರೊಫೆಸರೂ ಖಿನ್ನರಾಗಿದ್ದರು.

ಟ್ಯಾಕ್ಸಿ ಹತ್ತುವ ಮುನ್ನ ಪ್ರೊಫೆಸರು ಒಳಗೆ ಬಂದು ಮಾಧವರಾಯನ ಅಪ್ಪಣೆ ಪಡೆದು, ಎಲ್ಲರನ್ನೂ ವಿಶ್ವಾಸಪೂರ್ವಕ ಮಾತನಾಡಿಸಿ, ಗೋದಜ್ಜಿಯ ಪಾದಮುಟ್ಟಿ ನಮಸ್ಕರಿಸಿದರು.

ಗೋದಜ್ಜಿ ಕಣ್ಣುಗಳು ಹನಿಗೂಡಿದವು.

"ಹೋಗಿ ಬಾ ನಮ್ಮಪ್ಪ – ಭಗವಂತನು ನಿಮ್ಮನ್ನು ಸದಾಸುಖಿಯನ್ನಾಗಿಟ್ಟಿರಲಿ."

ಎಂದು ಮನಃಪೂರ್ವಕವಾಗಿ ಆಶೀರ್ವದಿಸಿದರು.

ಲಂಡನ್ ಗೆಳೆಯ ಗೆಳತಿಯರಿಗೆಲ್ಲಾ ವಿಶ್ವಾಸ ತಿಳಿಸಬೇಕೆಂದು ನಾರಾಯಣಸ್ವಾಮಿ ಪ್ರಾರ್ಥಿಸಿದ.

ಏರೋಡ್ರೋಮಿನಲ್ಲಿ ಸಿದ್ಧವಾಗಿ ನಿಂತಿದ್ದ ವಿಮಾನಕ್ಕೆ ಪ್ರೊಫೆಸರು, ಸ್ವಾಮಿಯ ಸಾಮಾನುಗಳನ್ನು ಕೂಲಿಗಳು ಒಯ್ದಿಟ್ಟರು.

ಪ್ರೊಫೆಸರು ಹಿಂದೂ ಪದ್ಧತಿಯಂತೆ ಕಮಲಾ, ಇಂದುಮತಿಗೆ ಕೈಮುಗಿದು

"ಈ ಮುದುಕನನ್ನು ಮರೆಯಬೇಡಿ" ಎಂದು ಮಕ್ಕಳನ್ನೆತ್ತಿಕೊಂಡು ಅಪ್ಪಿ ಮುದ್ದಾಡಿದರು.

ಮಾತನಾಡಲರಿಯದೆ ಕಮಲಾ, ಇಂದುಮತಿ ದುಃಖಿಸುತ್ತ ನಿಂತರು.

ವಿಮಾನ ಮೆಲ್ಲನೆ ನೆಲಬಿಟ್ಟು ಮೇಲಕ್ಕೇರಿತು – ಪ್ರೊಫೆಸರ ಆತ್ಮಪಕ್ಷಿಯ ಊರ್ಧ್ವಗಮನ ನಿರ್ದೇಶಿಸುವಂತೆ !

ಮುಂಬಯಿಯಲ್ಲಿ ಪ್ರೊಫೆಸರು ಇಳಿಯಲಿಲ್ಲ. ಏರೋಡ್ರೋಮಿನಲ್ಲೇ ಉಪಾಹಾರ ಮುಗಿಸಿಕೊಂಡು ಲಂಡನ್ನಿಗೆ ಪ್ರಯಾಣಮಾಡುತ್ತಿದ್ದ ಏರ್ ಇಂಡಿಯ – ಇಂಟರ್‌ನ್ಯಾಷನಲ್ (Air India-Inter-national) ಹತ್ತಲನುವಾದರು.

ಧ್ವನಿವರ್ಧಕ ಯಂತ್ರ ಮೊದಲನೆಯ ಸೂಚನೆಯಿತ್ತಿತು.

ಪ್ರೊಫೆಸರು ಸ್ವಾಮಿಯನ್ನಪ್ಪಿ

"ಬೇಗ ಬನ್ನಿ ಸ್ವಾಮಿ – ಎಂದರು."

ನಾರಾಯಣಸ್ವಾಮಿ ಭಕ್ತಿಪೂರ್ವಕವಾಗಿ ಗುರುಚರಣಗಳಿಗೆ ಅಭಿವಂದಿಸಿದ.

ಪ್ರೊಫೆಸರು ವಿಮಾನ ಹತ್ತುವ ಮುನ್ನ

"ಲಂಡನ್ನಿಗೆ ಬರುವ ಮುನ್ನ ಒಂದು ಕಾದಂಬರಿ ಮುಗಿಸಿ ಹಸ್ತಪ್ರತಿ ತೆಗೆದುಕೊಂಡು ಬನ್ನಿ."

"ಏನು ಬರೆಯಬೇಕೆಂಬುದೇ ಹೊಳೆಯಲೊಲ್ಲದು ಪ್ರೊಫೆಸರ್."

"ಯೋಚನೆ ಯಾಕೆ ? ನಿಮ್ಮ ತಾಯಿಯವರನ್ನೊಮ್ಮೆ ಸ್ಮರಿಸಿಕೊಂಡು ಬರೆಯುವುದಕ್ಕಾರಂಭಿಸಿ. ಕಾದಂಬರಿ ತಾನೇ ರೂಪುಗೊಳ್ಳುತ್ತದೆ."

ಧ್ವನಿವರ್ಧಕ ಯಂತ್ರ ದ್ವಿತೀಯ ಸೂಚನೆಯಿತ್ತಿತು.

ಪ್ರೊಫೆಸರು 'ನಮಸ್ತೇ' ಎಂದರು.

ಸ್ವಾಮಿ 'ನಮಸ್ತೇ ಗುರುದೇವ' ಎಂದ.

ವಿಮಾನ ಗುಡುಗಿ ಮೇಲಕ್ಕೇರಿತು.

ಅದೇ ರಾತ್ರಿ ನಾರಾಯಣಸ್ವಾಮಿ ರೈಲು ಹತ್ತಿ ಬೆಂಗಳೂರತ್ತ ಪ್ರಯಾಣ ಬೆಳೆಸಿದ.

ಜೀವನದ ಒಂದು ಅಧ್ಯಾಯ ಮುಗಿದು, ಎರಡನೆಯ ಅಧ್ಯಾಯ ಆರಂಭವಾಯಿತು ಎಂಬ ಭಾವನೆ ಥಟ್ಟನೆ ಅವನ ಮನಸ್ಸಿಗೆ ಹೊಳೆಯಿತು.

